# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 128 (1126) |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 13.03.2020 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಪಶುಸಂಗೋಪನಾ ಇಲಾಖೆಯಲ್ಲಿ ಸೃಜಿಸಲಾಗಿರುವ ಪಶು ತಜ್ಞ ವೈದ್ಯರ ಹುದ್ದೆಗಳ ಸಂಖ್ಯೆ ಎಷ್ಟು | ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಲ್ಲಿ ಮಂಜೂರಾದ, ಭರ್ತಿಯಾಗಿರುವ ಹಾಗೂ ಖಾಲಿಯಿರುವ ಪಶು ತಜ್ಞ ವೈದ್ಯರ ಹುದ್ದೆಗಳ ವಿವರ ಈ ಕೆಳಕಂಡಂತಿದೆ. |

| ಕ್ರ.ಸಂ | ಪದನಾಮ | ಮಂ | ಭರ್ತಿ | ಖಾಲಿ |
|---|---|---|---|---|
| 1 | ಉಪ ನಿರ್ದೇಶಕರು (ಪಾಲಿಕ್ಲೀನಿಕ್) (ವಿಷಯ ತಜ್ಞರು) | 30 | 04 | 26 |
| 2 | ಮುಖ್ಯ ಪಶು ವೈದ್ಯಾಧಿಕಾರಿ / ಹಿರಿಯ ಪಶುವೈದ್ಯಾಧಿಕಾರಿಗಳು / /ಪಶುವೈದ್ಯಾಧಿಕಾರಿಗಳು (ವಿಷಯ ತಜ್ಞರು) | 30 | 18 | 12 |
| | ಒಟ್ಟು | 60 | 22 | 38 |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಆ) | ಹಾಲಿ ಕಾರ್ಯನಿರ್ವಹಿಸುತ್ತಿರುವ ಪಶು ತಜ್ಞ ವೈದ್ಯರ ಸಂಖ್ಯೆ ಎಷ್ಟು: | ಇಲಾಖೆಯಲ್ಲಿ ಜಿಲ್ಲಾ ಕೇಂದ್ರದಲ್ಲಿರುವ ಪಾಲಿಕ್ಲಿನಿಕ್‌ಗಳಲ್ಲಿ ಒಟ್ಟು 22 ತಜ್ಞ ಪಶುವೈದ್ಯರು ಕರ್ತವ್ಯನಿರ್ವಹಿಸುತ್ತಿದ್ದಾರೆ. |
| ಇ) | ಬಹು ಸಂಖ್ಯಾ ತಜ್ಞ ವೈದ್ಯರುಗಳ ಜಿಲ್ಲಾ ಪಾಲಿಕ್ಲಿನಿಕ್‌ಗಳಲ್ಲಿ ಕಾರ್ಯನಿರ್ವಹಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು. |
| ಈ) | ಬಹು ಸಂಖ್ಯಾ ತಜ್ಞ ವೈದ್ಯರುಗಳು ಜಿಲ್ಲಾ ಪಾಲಿಕ್ಲಿನಿಕ್‌ಗಳಲ್ಲಿ ಕಾರ್ಯನಿರ್ವಹಿಸದೆ ಇರಲು ಕಾರಣಗಳೇನು (ವಿವರ ನೀಡುವುದು) | ವೃಂದ ಮತ್ತು ನೇಮಕಾತಿ ನಿಯಮಾವಳಿಯನ್ವಯ ಎಂ.ವಿ.ಎಸ್.ಸಿ ಮತ್ತು ಪಿ.ಹೆಚ್.ಡಿ ಪದವಿ ಹೊಂದಿರುವ ಅಧಿಕಾರಿಗಳನ್ನು ಪಾಲಿಕ್ಲಿನಿಕ್‌ನಲ್ಲಿರುವ ವಿಷಯ ತಜ್ಞರ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲು ಆದ್ಯತೆ ನೀಡಬೇಕೆಂದಿರುತ್ತದೆ. ವಿಷಯ ತಜ್ಞರು ಇಲ್ಲದಿದಲ್ಲಿ ಜೇಷ್ಠತೆಯುಳ್ಳ ಇತರೆ ಪಶುವೈದ್ಯರನ್ನು ನಿಯುಕ್ತಿಗೊಳಿಸಬಹುದಾಗಿರುತ್ತದೆ. ಆದರೆ, ಮುಂಬಡ್ತಿ ಹಾಗೂ ಕಾಲಮಿತಿ ಮುಂಬಡ್ತಿ ನೀಡಿದ ಸಂದರ್ಭದಲ್ಲಿ ತಜ್ಞ ವೈದ್ಯರಿಗೆ ಜೇಷ್ಠತೆ ಇಲ್ಲದ ಕಾರಣ ಸ್ಥಳ ನಿಯುಕ್ತಿ ನೀಡಲು ಸಾಧ್ಯವಾಗಿರುವುದಿಲ್ಲ. |

| | | |
|---|---|---|
| ಉ) | ಸದರಿ ತಜ್ಞ ವೈದ್ಯರುಗಳು ಜಿಲ್ಲಾ ಪಾಲಿಕ್ಲೀನಿಕ್‌ಗಳಲ್ಲಿ ಕಡ್ಡಾಯವಾಗಿ ಕಾರ್ಯನಿರ್ವಹಿಸುವಂತೆ ಮಾಡಲು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಇಲಾಖೆಯಲ್ಲಿ ಎಂ.ವಿ.ಎಸ್ಸಿ ಮತ್ತು ಪಿ.ಹೆಚ್.ಡಿ ಪದವಿ ಹೊಂದಿರುವ ಅಧಿಕಾರಿಗಳನ್ನು ಜಿಲ್ಲಾ ಪಾಲಿಕ್ಲಿನಿಕ್‌ಗಳಲ್ಲಿನ ತಜ್ಞ ವೈದ್ಯರ ಹುದ್ದೆಗಳಿಗೆ ನೇಮಕಾತಿ ಮಾಡಲು ಅವಕಾಶವಿರುತ್ತದೆ.<br><br>ಇಲಾಖೆಯಲ್ಲಿ ಪ್ರಸ್ತುತ ಖಾಲಿ ಇರುವ ತಜ್ಞ ವೈದ್ಯರ ಹುದ್ದೆಗಳನ್ನು ಮುಂಬಡ್ತಿ / ಕಾಲಬದ್ದ ಮುಂಬಡ್ತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಪರಿಶೀಲನೆಯಲ್ಲಿದ್ದು, ಮುಂಬಡ್ತಿ ಆದೇಶ ಹೊರಡಿಸುವ ಸಮಯದಲ್ಲಿ ಪಾಲಿಕ್ಲಿನಿಕ್‌ಗಳಲ್ಲಿ ಖಾಲಿ ಇರುವ ತಜ್ಞ ವೈದ್ಯರ ಹುದ್ದೆಗಳನ್ನು ಎಂ.ವಿ.ಎಸ್ಸಿ ಮತ್ತು ಪಿ.ಹೆಚ್.ಡಿ ಪದವಿ ಹೊಂದಿರುವ ಅಧಿಕಾರಿಗಳು ಲಭ್ಯವಿದ್ದಲ್ಲಿ ಅಂತಹ ಅಧಿಕಾರಿಗಳನ್ನು ಸ್ಥಳ ನಿಯುಕ್ತಿಗೊಳಿಸಲು ಆದ್ಯತೆ ಮೇರೆಗೆ ಪರಿಶೀಲಿಸಲಾಗುವುದು.<br><br>ಪಾಲಿಕ್ಲಿನಿಕ್‌ಗಳಲ್ಲಿ ಖಾಲಿ ಇರುವ ತಜ್ಞ ಪಶುವೈದ್ಯರ ಹುದ್ದೆಗಳಿಗೆ ರೈತರಿಗೆ ತೊಂದರೆಯಾಗದ ರೀತಿಯಲ್ಲಿ ಅಧಿಕ ಪ್ರಭಾರ ವ್ಯವಸ್ಥೆ ಮಾಡಲಾಗಿದೆ. |

ಸಂಖ್ಯೆ: ಪಸಂಮೀ ಇ–41 ಪಸಸೇ 2020

(ಪ್ರಭು ಬಿ. ಚವ್ಹಾಣ್)
**ಪಶುಸಂಗೋಪನೆ, ಹಜ್ ಮತ್ತು ವಕ್ಫ್ ಸಚಿವರು**